# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1564 |
| 2 | ವಿಧಾನ ಪರಿಷತ್ತಿನ ಸದಸ್ಯರ ಹೆಸರು | : | ಶ್ರೀ ಪಿ.ಆರ್.ರಮೇಶ್ (ನಾಮನಿರ್ದೇಶಿತ ಹೊಂದಿದವರು) |
| 3 | ಉತ್ತರಿಸುವ ಸಚಿವರು | : | ತೋಟಗಾರಿಕೆ ಹಾಗೂ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು |
| 4 | ಉತ್ತರಿಸಬೇಕಾದ ದಿನಾಂಕ | : | 24.09.2021 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 2 ವರ್ಷಗಳಿಂದ ಕರೋನ ವೈರಾಣು ರೋಗದ ಬಾಧೆ ಮತ್ತು ಪ್ರಕೃತಿ ವೈಫಲ್ಯದ ಹಿನ್ನೆಲೆಯಲ್ಲಿ ಸಂಕಷ್ಟ ಅನುಭವಿಸುತ್ತಿರುವ ರಾಜ್ಯದ ದ್ರಾಕ್ಷಿ ಬೆಳೆಯುವ ರೈತರಿಗೆ ಬೆಳೆ ನಾಶವಾಗಿ ತೊಂದರೆ ಅನುಭವಿಸುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ? ಬಂದಿದ್ದಲ್ಲಿ ಸರ್ಕಾರದ ಕ್ರಮವೇನು; (ವಿವರ ನೀಡುವುದು) | ಸರ್ಕಾರದ ಗಮನಕ್ಕೆ ಬಂದಿದೆ.<br>ರಾಜ್ಯದಲ್ಲಿ ಕರೋನಾ ವೈರಾಣು ರೋಗದ ಬಾಧೆಯಿಂದ ಸಂ ಅನುಭವಿಸಿರುವ ದ್ರಾಕ್ಷಿ ಬೆಳೆದಿರುವ ರೈತರಿಗೆ ಈ ಕೆಳಕಂಡಂತೆ ಪರಿ ನೀಡಲಾಗಿರುತ್ತದೆ.<br>ಕ್ರ. ಸಂ \| ವರ್ಷ \| ಫಲಾನುಭವಿಗಳ ಸಂಖ್ಯೆ \| ವಿಸ್ತೀರ್ಣ (ಹೆ) \| ಮೊತ್ತ (ರೂ.ಕೋಟಿಗಳಲ್<br>1. \| 2020-21 \| 3411 \| 1948.40 \| 2.9226<br>2. \| 2021-22 \| 3428 \| 2118.00 \| 2.1180<br>2. ಪ್ರಕೃತಿ ವೈಫಲ್ಯದಿಂದ ರಾಜ್ಯದಲ್ಲಿ 2020-21 ನೇ ಸಾಲಿನಲ್ಲಿ 5264.2 ಪ್ರದೇಶದಲ್ಲಿ ಹಾನಿಯಾಗಿದ್ದು ಕಂದಾಯ ಇಲಾಖೆ ವತಿಯಿಂದ ಪರಿಹಾರ ಪಾವತಿಸಲಾಗಿದೆ. 2021-22 ನೇ ಸಾಲಿನಲ್ಲಿ 144 ಹೆ. ಪ್ರದೇಶದಲ್ಲಿ ದ್ರಾಕ್ಷಿ ಹಾನಿಯಾಗಿದ್ದು ಕಂದಾಯ ಇಲಾಖೆವತಿಯಿಂದ ಕೇಂದ್ರ ಸರ್ಕಾರಕ್ಕೆ ಮೆಮೊರಾಂ ಸಲ್ಲಿಸಲಾಗಿರುತ್ತದೆ. |
| ಆ) | ಸದರಿ ದ್ರಾಕ್ಷಿ ಬೆಳೆಯುವ ರೈತರ ಸಂಕಷ್ಟಕ್ಕೆ ಸರ್ಕಾರದಿಂದ ಯಾವುದಾದರೂ ಬೆಳೆ ಹಾನಿ ಸಮೀಕ್ಷೆಯನ್ನು ಮಾಡಿಸಲಾಗಿದೆಯೇ; (ವಿವರ ನೀಡುವುದು) ಪರಿಹಾರ ನೀಡುವ ಕುರಿತು ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; (ವಿವರ ನೀಡುವುದು) | ದ್ರಾಕ್ಷಿ ಬೆಳೆಯುವ ರೈತರಿಗೆ ಅತಿವೃಷ್ಟಿ ಮತ್ತು ಪ್ರವಾಹದಿಂದಾಗಿ ಸಂಕಷ್ಟಕ್ಕೆ 2021-22 ನೇ ಸಾಲಿನ ಅಂದಾಜು ಬೆಳೆಹಾನಿ ಸಮೀಕ್ಷೆ ಮಾಡಿಸಲ ಪ್ರಮುಖವಾಗಿ ಬೆಳಗಾವಿ ಜಿಲ್ಲೆಯಲ್ಲಿ 130 ಹೆ ಮತ್ತು ಬಾಗಲಕೋ ಜಿಲ್ಲೆಯಲ್ಲಿ 14 ಹೆ ಪ್ರದೇಶದಲ್ಲಿ ದ್ರಾಕ್ಷಿ ಬೆಳೆ ಹಾನಿಯಾಗಿರುತ್ತದೆ. ಪ ನೀಡುವ ಕುರಿತು ಪ್ರಸ್ತಾವನೆ ಸರ್ಕಾರದ ಮುಂದಿದ್ದು ಕಂದಾಯ ಇಲಾ ವತಿಯಿಂದ ಕೇಂದ್ರ ಸರ್ಕಾರಕ್ಕೆ ಮೆಮೊರಾಂಡಮ್ ಸಲ್ಲಿಸಲಾಗಿರುತ್ತದೆ. |
| ಇ) | ತೋಟಗಾರಿಕೆ ಬೆಳೆಗಳಿಗೆ ಸಮರ್ಪಕವಾದ ಸರ್ಕಾರಿ/ಸಹಕಾರಿ/ಖಾಸಗಿ ಮಾರುಕಟ್ಟೆ ವ್ಯವಸ್ಥೆಯಿಲ್ಲದೇ ಬೆಳೆಗಾರರು ಸಂಕಷ್ಟ ಅನುಭವಿಸುತ್ತಿರುವ ಕುರಿತು ಸರ್ಕಾರದ ಕ್ರಮವೇನು? (ವಿವರ ನೀಡುವುದು) | ತೋಟಗಾರಿಕೆ ಬೆಳೆಗಳಿಗೆ ಸಮರ್ಪಕವಾದ ಸರ್ಕಾರಿ/ಸಹಕಾರಿ/ಖಾಸಗಿ ವಲಯ ಮಾರುಕಟ್ಟೆ ವ್ಯವಸ್ಥೆ ಕುರಿತು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ.<br>೧.ರಾಜ್ಯದಲ್ಲಿ ರೈತರು ಬೆಳೆದ ತೋಟಗಾರಿಕೆ ಬೆಳೆಗಳನ್ನು ಸಮರ್ಪಕವಾಗಿ ಮಾ ಮಾಡಲು ತೋಟಗಾರಿಕೆ ಇಲಾಖೆ ವತಿಯಿಂದ ಈ ಕೆಳಕಂಡ ವಿವಿಧ ವ್ಯವಸ್ಥೆಗ ಸ್ಥಾಪಿಸಲಾಗಿರುತ್ತದೆ.<br>ಅ) ಕರ್ನಾಟಕ ರಾಜ್ಯ ಸಹಕಾರಿ ತೋಟಗಾರಿಕಾ ಮಾರಾಟ ಮಹಾ ಮಂಡಳ (ನಿ) (ಕೆ.ಹೆಚ್.ಎಫ್) |

| | | |
|---|---|---|
| | | 1.ರಾಜ್ಯದಲ್ಲಿ ಒಟ್ಟು 22 ಜಿಲ್ಲೆಗಳಲ್ಲಿ ಹಾಪ್ ಕಾಮ್ಸ್ ಮೂಲಕ ರೈತ ಸದಸ್ಯರಿಂದ ತೋಟಗಾರಿಕೆ ಉತ್ಪನ್ನಗಳನ್ನು ಸಂಗ್ರಹಿಸಿ ಮಾರಾಟ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ.<br>2. ರಾಜ್ಯ ಮಟ್ಟದಲ್ಲಿ ಕೆ.ಹೆಚ್.ಎಫ್ ಅಧೀನದಲ್ಲಿ ಎಲ್ಲಾ 22 ಜಿಲ್ಲಾ ಹಾಪ್ ಕಾಮ್ಸ್ ಗಳು ಕಾರ್ಯ ನಿರ್ವಹಿಸುತ್ತಿರುತ್ತವೆ ಹಾಗು ಕೆ.ಹೆಚ್.ಎಫ್ ಮೂಲಕ ಜಿಲ್ಲಾ ಹಾಪ್ ಕಾಮ್ಸ್ ಗಳಲ್ಲಿ ಮೂಲಭೂತ ಸೌಕರ್ಯಗಳ ನಿರ್ಮಾಣ ಹಾಗು ಮಾರಾಟ ವ್ಯವಸ್ಥೆ ಅಭಿವೃದ್ಧಿ ಪಡಿಸಲಾಗುತ್ತಿರುತ್ತದೆ.<br>ಆ) ನಿಗಮ ಮತ್ತು ಮಂಡಳಿ ಸ್ಥಾಪನೆ<br>ಪ್ರಮುಖ ತೋಟಗಾರಿಕೆ ಬೆಳೆಗಳ ಉತ್ಪಾದನೆ, ಸಂಸ್ಕರಣೆ, ಮೌಲ್ಯವರ್ಧನೆ ಮತ್ತು ಮಾರಾಟ ವ್ಯವಸ್ಥೆಯ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ನಿಗಮ ಮತ್ತು ಮಂಡಳಿಗಳನ್ನು ಸ್ಥಾಪಿಸಲಾಗಿರುತ್ತದೆ.<br>a) ಕರ್ನಾಟಕ ರಾಜ್ಯ ಮಾವು ಅಭಿವೃದ್ಧಿ ಮತ್ತು ಮಾರುಕಟ್ಟೆ ನಿಗಮ ನಿಯಮಿತ<br>b) ಕರ್ನಾಟಕ ರಾಜ್ಯ ದ್ರಾಕ್ಷಾರಸ ಮಂಡಳಿ<br>c) ಕರ್ನಾಟಕ ರಾಜ್ಯ ಲಿಂಬೆ ಅಭಿವೃದ್ಧಿಮಂಡಳಿ<br>d) ಕರ್ನಾಟಕ ರಾಜ್ಯ ಸಾಂಬಾರು ಪದಾರ್ಥಗಳ ಅಭಿವೃದ್ಧಿ ಮಂಡಳಿ<br>• ಸದರಿ ನಿಗಮ ಮತ್ತು ಮಂಡಳಿಗಳ ಮೂಲಕ ಅಭಿವೃದ್ಧಿ ಹಾಗು ರಫ್ತು ಉತ್ತೇಜಿತ ಕಾರ್ಯಕ್ರಮಗಳನ್ನುಅನುಷ್ಠಾನಗೊಳಿಸ ಲಾಗುತ್ತಿದೆ.<br>○ ರೈತ ಉತ್ಪಾದಕ ಸಂಸ್ಥೆಗಳ ಮೂಲಕ ತೋಟಗಾರಿಕೆ ಉತ್ಪನ್ನಗಳಿಗ ಮಾರಾಟ ವ್ಯವಸ್ಥೆಯನ್ನು ಕಲ್ಪಿಸಲಾಗುತ್ತಿದೆ.<br>ಇ)ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಮಾರುಕಟ್ಟೆ ಮೂಲಭೂತ ಸೌಕರ್ಯ ನಿರ್ಮಾಣ ಮಾಡಲು ಚಿಲ್ಲರೆ ಮಾರುಕಟ್ಟೆ, ಸಗಟು ಮಾರುಕಟ್ಟೆ ಮತ್ತು ಗ್ರಾಮೀಣ ಮಾರುಕಟ್ಟೆ ನಿರ್ಮಾಣ ಕಾರ್ಯಕ್ರಮಗಳಿಗೆ ಸಹಾಯಧನ ಕಲ್ಪಿಸಲಾಗುತ್ತಿದೆ.<br>ಈ) ಮಾರುಕಟ್ಟೆ ಮಧ್ಯಪ್ರವೇಶ ಯೋಜನೆ:<br>ತೋಟಗಾರಿಕೆ ಉತ್ಪನ್ನಗಳ ಮಾರುಕಟ್ಟೆ ಧಾರಣೆ ಕುಸಿತಗೊಂಡಾಗ ನಿಯಮಾನುಸಾರ ಮಾರುಕಟ್ಟೆ ಮಧ್ಯಪ್ರವೇಶ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತದೆ.<br>ಉ) ಶೀತಲಗೃಹಗಳ ನಿರ್ಮಾಣ: ರೈತರ ಅನುಕೂಲಕ್ಕಾಗಿ ರಾಜ್ಯದಲ್ಲಿ159 ಸಂಖ್ಯೆಯ 5.37ಲಕ್ಷಮೆ.ಟನ್ ಸಾಮರ್ಥ್ಯ ಹೊಂದಿರುವ ಶೀತಲ ಗೃಹಗಳನ್ನು ನಿರ್ಮಿಸಲಾಗಿರುತ್ತದೆ.<br>ಊ) ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಡಿ ಮತ್ತು ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಸಂಸ್ಕರಣೆ ಮತ್ತು ಮೌಲ್ಯವರ್ಧನೆಘಟಕಗಳಿಗೆ ಸಹಾಯಧನ ಒದಗಿಸಲಾಗುತ್ತಿದೆ.<br>ಋ) ರಾಷ್ಟ್ರೀಯ ಇ ಮಾರುಕಟ್ಟೆ ಸೇವೆ: ಆಯ್ದ ತೋಟಗಾರಿಕೆ ಬೆಳೆಗಳಿಗೆ ರಾಷ್ಟ್ರೀಯ ಇ ಮಾರುಕಟ್ಟೆ ಸೇವೆಯ ಮೂಲಕ ಆನ್ ಲೈನ್ ಮಾರುಕಟ್ಟೆ ವವಯವಸ್ಥೆ ಕಲ್ಪಿಸಲಾಗಿದೆ. |

No.HORTI 448 HGM 2021

(ಮುನಿರತ್ನ)
ತೋಟಗಾರಿಕೆ ಮತ್ತು ಯೋಜನೆ, ಕಾರ್ಯಕ್ರಮ
ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು.